

# ಮಂಗನ ಕಾಯಿಲೆ

ಡಾ। ಶಿವರಾಮ ಕಾರಂತ

# ಮಂಗನ ಕಾಯಿಲೆ

(ಸರಳ ಭಾಷೆಯಲ್ಲಿ ಬರೆದ ಕಿರು ಪರಿಚಯ)

COMMUNITY HEALTH CELL
326, V Main, I Block
Koramangala
Bangalore-560034
India

ಬರೆದವರು:

**ಶಿವರಾಮ ಕಾರಂತ**

ಆರ್ಥಿಕ ನೆರವು:

**ಲಯನ್ಸ್ ಕ್ಲಬ್, ಮುಂಡಾಜೆ**

ಪ್ರಕಾಶಕರು:

ಸದಾಶಯ ಪ್ರಕಾಶನ ಮುಂಡಾಜೆ

ದ. ಕ. 574 228

'Mangana Kaile' a book in kannada on Kyasanur Forest Disease written by **Dr. Kota Shivarama Karantha** at Saligrama Da. Ka. and Published by **Sadashaya Prakashana**, Mundaje Da. Ka. 574 228.

Editor: Lion Shampa Daitota

Dt. Chairman: Rural Development
Lions Clubs Inter National District 324 D4

Financial Aid: by the Lions Club Mundaje Da. Ka. 574228

DIS 310 1161

First Print: 1984. 10,000 Copies
Pages: 16+4

COMMUNITY HEALTH CELL
47/1, (First Floor) St. Marks Road,
Bangalore - 560 001.

Photos & Charts etc.: Lion Yajna; N. I. V ; SONA

Blocks & Cover Printed at:
M/s Manipal Power Press, Manipal Da. Ka. 576 119
(Free of cost)

Printers:
M/s Manjushri Printers. Ujire Da. Ka. 574 240

# ಮುನ್ನುಡಿ

'ಮಂಗನ ಕಾಯಿಲೆ' ನಮ್ಮ ಲಯನ್ಸ್ ಡಿಸ್ಟ್ರಿಕ್ಟ್ 324 D 4ರಲ್ಲಿ ಮಾಡು ತ್ತಿರುವ ಹಾವಳಿ ಭಯಂಕರ. ಈ ಹಾನಿಯನ್ನು ತಡೆಗಟ್ಟಲು ಸರಕಾರ ಹಾಗೂ ಸಂಸ್ಥೆಗಳು ಜನರಿಗೆ ನೆರವಾಗಿ ಮಾಡಬೇಕಾಗಿರುವ ಕಾರ್ಯ ತುಂಬಾ ಇದೆ. ಈಚೆಗಿನ ದಿನಗಳಲ್ಲಿ ಈ ಪಿಡುಗು ನಿರ್ಮಿಸಿದ ವಿಷಮ ಪರಿಸ್ಥಿತಿಯನ್ನು ಎದು ರಿಸುವ ಕಾರ್ಯಾಚರಣೆ ಸರಕಾರವೊಂದರಿಂದಲೇ ಆಗುವ ಕೆಲಸವಲ್ಲ; ಸೇವಾ ಸಂಸ್ಥೆಗಳೂ ಮುಂದೆ ಬಂದು ದುಡಿಯಬೇಕು. ಜಗತ್ತಿನ ಅತಿ ವಿಸ್ತಾರವಾದ ಸೇವಾ ಸಂಸ್ಥೆಯೆಂದು ಹೆಸರಾದ 'ಲಯನ್ಸ್' ತನು ಮನ ಧನಗಳಿಂದ ಸತ್ವ ಪೂರ್ಣವಾಗಿ ಶ್ರಮಿಸಬೇಕು. ಈ ದಿಕ್ಕಿನಲ್ಲಿ ನಮ್ಮ ಕ್ಲಬ್ ಈಗಾಗಲೇ ಬಹ ಳಷ್ಟು ದುಡಿದಿದೆ, ದುಡಿಯುತ್ತಿದೆ.

ಮುಖ್ಯವಾಗಿ ಈ ಸಮಸ್ಯೆಯನ್ನೆದುರಿಸುವ ಸಾಮರ್ಥ್ಯ ಜನರಿಗೆ ಉಂಟಾ ಗುವಂತೆ ಮಾಡಲು 'ಮಂಗನ ಕಾಯಿಲೆ'ಯ ಕುರಿತಾದ ಸಂಪೂರ್ಣ ಮಾಹಿತಿ ಅದನ್ನು ತಡೆಗಟ್ಟಬಹುದಾದ ವಿಧಾನ ಮೊದಲಾದವನ್ನೆಲ್ಲ ತಿಳಿಸಿ ಕೊಡಬೇಕಾ ಗಿದೆ. ನಾವೀಮೊದಲೇ ಡಾ। ಹ. ರ. ಭಟ್ಟರ ಪುಸ್ತಕ 'ಕ್ಯಾಸನೂರ ಕಾಡಿನ ಕಾಯಿಲೆ'ಯ ಪ್ರಕಟಣೆ ಮತ್ತು ಉಚಿತ ವಿತರಣೆಗೆ ನೆರವು ನೀಡಿದ್ದೇವೆ. ಇದೀಗ ತೀರಾ ಸರಳವಾಗಿ ಡಾ। ಶಿವರಾಮ ಕಾರಂತರು ಬರೆದ 'ಮಂಗನ ಕಾಯಿಲೆ' ಹೊರತರಲು ಸಹಕರಿಸುತ್ತಿದ್ದೇವೆ. ಇವಲ್ಲದೆ ಈ ಕಾಯಿಲೆ ತಡೆ ಗಾಗಿ "ಉಣ್ಣಿಗಳ ನಿಯಂತ್ರಣ" (ಡಾ। ಹ. ರ. ಭಟ್ಟರಿಂದ) ಪುಸ್ತಿಕೆಯನ್ನು ಪ್ರಕಟಿಸಲು ಯೋಜಿಸಿರುವ ಸದಾಶಯ ಪ್ರಕಾಶನಕ್ಕೆ ಎಲ್ಲ ಸಹಕಾರ ಬೇಕು. ಈ ಪ್ರಕಟಣೆಗಳನ್ನೆಲ್ಲ ಜನರಿಗೆ ತಲಪಿಸಿ ತಿಳುವಳಿಕೆ ಹರಡಿ ಕಾಯಿಲೆ ಬಾರದಂತೆ ಮಾಡುವಲ್ಲೂ ಎಲ್ಲಾ ಲಯನ್ಸ್ ಮತ್ತು ಜನರೂ ಕೂಡ ವಿಶೇಷ ಸಹಕಾರ ನೀಡಬೇಕು.

15-6-1984

**Lion Neria Rajagopal Hebbar**
Chairman: K. F. D. R. Committee
LIONS CLUB MUNDAJE

# ಪ್ರಕಾಶಕರ ನುಡಿ

ಇದೇ ಕಳೆದ ಫೆಬ್ರುವರಿಯಲ್ಲಿ ಬಿಡುಗಡೆಯಾದ ಡಾ। ಹ. ರ. ಭಟ್ಟರ ಕ್ಯಾಸನೂರ ಕಾಡಿನ ಕಾಯಿಲೆ (ಮಂಗನ ಕಾಯಿಲೆ) ಪುಸ್ತಕದ ಮಹತ್ವವನ್ನು ಅದರ ಜನಪ್ರಿಯತೆಯಿಂದಲೇ ಪರಿಗಣಿಸಬಹುದು. ಈ ಕಾಯಿಲೆ ಮಲೆನಾಡಿಗಷ್ಟೇ ಸೀಮಿತವಾದ್ದು; ಆದರೂ ಕರ್ನಾಟಕದ ಮೂಲೆ ಮೂಲೆಗಳಿಂದ ಪುಸ್ತಕಕ್ಕೆ ಬಂದ ಬೇಡಿಕೆ ಜನರಲ್ಲಿ ಮೂಡಿದ ಜ್ಞಾನದಾಹದ ಪ್ರತೀಕ. ಡಾ। ಭಟ್ಟರ ಪುಸ್ತಕ ಒಂದು ವೈಜ್ಞಾನಿಕ ಬರಹ. ಹೊಸತಾಗಿ ಓದಲು ಕಲಿತವರಿಗೆಲ್ಲ ಸುಲಭದಲ್ಲಿ ತಿಳಿಯುವುದಲ್ಲ ಹಳ್ಳಿಗಳ ಕೃಷಿಕ ಕಾರ್ಮಿಕರಿಗೇ ಬರುವ ಈ ರೋಗದ ಕುರಿತಾಗಿ ಬರಹ ಬಲ್ಲವರೆಲ್ಲಾ ಓದಿ ತಿಳಿಯಲಾಗುವ ಒಂದು ಸರಳ ಶೈಲಿಯ ಕೃತಿ ಬೇಕಿತ್ತು. ಸುಪ್ರಸಿದ್ಧ ಸಾಹಿತಿಗಳೂ, ಜ್ಞಾನಪೀಠ ಪ್ರಶಸ್ತಿ ವಿಜೇತರೂ, ಮೇಲಾಗಿ ಮಾನವೀಯತಾವಾದಿಗಳೂ ಆದ ಡಾ। ಶಿವರಾಮ ಕಾರಂತರು ಸ್ವಸಂತೋಷದಿಂದ ಈ ಕೃತಿ ನಿರ್ಮಿಸಿ ಆ ಕೊರತೆಯನ್ನು ನೀಗಿಸಿದ್ದಾರೆ. ಅಸಹಾಯಕರಿಗೆ ನೆರವಾಗುವುದೇ ಅವರ ಉದ್ದೇಶ. ಅವರಿಗೆ ನಾವು ಚಿರ ಋಣಿಗಳು. ಈ ಕೃತಿಯನ್ನು ಪ್ರಕಟಿಸುವುದು ನಮಗೊಂದು ಹೆಮ್ಮೆ.

ಈ ಪುಸ್ತಿಕೆಯ ಚಿತ್ರಗಳನ್ನೆಲ್ಲ ಮಣಿಪಾಲ ಪವರ್ ಪ್ರೆಸ್‌ನವರು ಮುದ್ರಿಸಿ ಉಚಿತವಾಗಿ ಒದಗಿಸಿದ್ದಾರೆ. ಅವರನ್ನೂ ಹೃತ್ಪೂರ್ವಕ ಅಭಿನಂದಿಸುತ್ತೇವೆ. ಸಾಹಿತ್ಯ ಮತ್ತು ಚಿತ್ರಾದಿಗಳನ್ನೊದಗಿಸಿದ ಪುಣೆಯ ರಾ. ವಿ. ವಿ. ಸಂಸ್ಥೆ ಹಾಗೂ ಡಾ। ಹ. ರ. ಭಟ್ಟರಿಗೆ ಮತ್ತಿತರ ಗೆಳೆಯರಿಗೆ; ಅಂದವಾಗಿ ಮುದ್ರಿಸಿಕೊಟ್ಟ ಮಂಜುಶ್ರೀ ಮುದ್ರಣಾಲಯದವರಿಗೆ ನಮ್ಮ ಕೃತಜ್ಞತೆಗಳು. ಪ್ರಕಟಣೆಗೆ ಆರ್ಥಿಕ ನೆರವನ್ನಿತ್ತ ಮುಂಡಾಜೆ ಲಯನ್ಸ್ ಕ್ಲಬ್‌ಗೆ ನಾವು ಆಭಾರಿಗಳು.

ದಯವಿಟ್ಟು ಜನರೆಲ್ಲ ಇದರ ಸಂಪೂರ್ಣ ಪ್ರಯೋಜನ ಪಡೆಯಬೇಕು.

"ಲೋಕಾಃ ಸಮಸ್ತಾಃ ಸುಖಿನೋ ಭವಂತು"

# ಮಂಗನ ಕಾಯಿಲೆ

ಈಚಿನ ಎರಡು ವರ್ಷಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಕೆಲವೊಂದು ಹಳ್ಳಿಗಳಲ್ಲಿ, ಮಂಗಗಳಿಂದ ಪ್ರಸಾರಗೊಳ್ಳುವ ಒಂದು ವಿಚಿತ್ರ ಬೇನೆ, ಕಾಡಿನ ಮಗ್ಗುಲಲ್ಲಿ ವಾಸಿಸುತ್ತಿರುವ ಜನಗಳಲ್ಲಿ ಕಾಣಿಸಿಕೊಳ್ಳುತ್ತಿದೆ. ಈ ಕಾಯಿಲೆ ಕಾಣಿಸುವ ಮುಂಚೆಯೇ ಅಂಥ ಪ್ರದೇಶಗಳಲ್ಲಿ ಕಾಡಿನ ಕಪಿಗಳು ಸತ್ತು ಬಿದ್ದಿದ್ದು ಕಾಣಿಸಿತ್ತು. ಈ ಕಪಿಗಳ ಸಾವಿಗೆ ಕಾರಣವಾದ ಅದೇ ಕಾಯಿಲೆ ಮನುಷ್ಯರಿಗೆ ಹಬ್ಬುತ್ತಿದೆ. ಇದೊಂದು ನಿಜಕ್ಕೂ ವಿಚಿತ್ರ ಕಾಯಿಲೆ; ಅದು ಆರಂಭದಲ್ಲಿ 'ಇಂಥದೇ ಬೇನೆ' ಎಂದು ಹೇಳುವುದಕ್ಕೆ ಕಷ್ಟವಾದ ಚಿಹ್ನೆಗಳಿಂದ ಕೂಡಿದ್ದು 'ಇದು ಆ ಬೇನೆ ಇರಬಹುದೇ' ಅಥವಾ 'ಈ ಬೇನೆ ಇರಬಹುದೇ' ಎಂದು ಯೋಚಿಸುವುದರೊಳಗೆ ರೋಗ ಅಂಟಿದ ಜನರು ರಕ್ತಕಾರಿ ಸಾಯುತ್ತಾರೆ. ಅಂಥ ಒಂದು ಬೇನೆ ನಮ್ಮ ಅರಣ್ಯ ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಕಂಡುಬಂದಿದೆ. ಈಗಾಗಲೆ ಅದರಿಂದ ನಮ್ಮ ಜಿಲ್ಲೆಯಲ್ಲಿ 250ಕ್ಕಿಂತಲೂ ಹೆಚ್ಚಿಗೆ ಜನರು ಸತ್ತಿದ್ದಾರೆ.

## ಕ್ಯಾಸನೂರು

ಇದೇ ರೀತಿ ಮಂಗಗಳಿಂದ ಜನಗಳಿಗೆ, ಕೆಲಕೆಲವು ಸೂಕ್ಷ್ಮ ಜೀವಾಣುಗಳ ಮೂಲಕ ಹಬ್ಬುವ, ಒಂದು ಘೋರ ಕಾಯಿಲೆ ಆಫ್ರಿಕಾ ಖಂಡದ ಅನೇಕ ಕಡೆಗಳಲ್ಲಿದೆ, ಅಲ್ಲಿನವರು ಅದನ್ನು ಹಳದಿ ಜ್ವರ ಎನ್ನುತ್ತಾರೆ. ಇಂದಿಗೆ ಸುಮಾರು 25 ವರ್ಷಗಳ ಹಿಂದೆ, ಮಂಗಗಳಿಂದ ಹಬ್ಬುವ ಆದರೆ ಬೇರೆಯೇತೆರನ ಕಾಯಿಲೆ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಜನಗಳನ್ನು ಬಾಧಿಸತೊಡಗಿತು. ಅಲ್ಲಿಯೂ ಮೊದಲು ಮಂಗಗಳು ಕಾಯಿಲೆಗೆ ಗುರಿಯಾಗಿ ಸತ್ತವು. ಅವುಗಳ ಸಾವಿಗೆ ಕಾರಣವಾದ ರೋಗಾಣುಗಳು ಮನುಷ್ಯರಿಗೂ ಹಬ್ಬಿ ಕ್ಯಾಸನೂರ ಎಂಬ ಹಳ್ಳಿಯಲ್ಲಿ ಸಾಕಷ್ಟು ಜನ ಸತ್ತರು. ಈ ಕಾಯಿಲೆ ಕಾಣಿಸಿಕೊಂಡ ಕಾಲಕ್ಕೆ, ಅದು ಆಫ್ರಿಕಾ ಖಂಡದ ಹಳದಿ ಜ್ವರವೇ ಇರಬಹುದು ಎಂಬ ಸಂಶಯ ಹಲವು

ವೈದ್ಯರಲ್ಲಿ ಕಾಣಿಸಿಕೊಂಡದ್ದುಂಟು. ಹಳದಿ ಜ್ವರ ಮಂಗಗಳನ್ನು ಸೊಳ್ಳೆಗಳು ಕಡಿದು ಅವುಗಳ ರಕ್ತ ಹೀರಿ, ತಿರುಗಿ ಇತರರಿಗೆ ಕಚ್ಚಿದರೆ, ಆ ರೋಗ ಹಬ್ಬುತ್ತದೆ ಎಂಬುದು ಗೊತ್ತಾಗಿತ್ತು. 1956ನೇ ಇಸವಿಯಲ್ಲಿ ಕ್ಯಾಸನೂರಲ್ಲಿಯೂ ಮೊದಲು ಮಂಗಗಳು ಸತ್ತು, ಆನಂತರ ರೋಗ ಜನರಲ್ಲಿ ಕಾಣಿಸಿಕೊಂಡು. ಹಲವರ ಸಾವಿಗೂ ಕಾರಣವಾಯಿತು. ಆಗ ಕೆಲವು ವಿಜ್ಞಾನಿಗಳು ಕ್ಯಾಸನೂರಿನಲ್ಲಿ ರೋಗದಿಂದ ಸತ್ತ ಮಂಗಗಳ ಮೃತ ದೇಹಗಳನ್ನು ಪರೀಕ್ಷಿಸಿದರು. ಅದರ ಅವಯವಗಳಲ್ಲಿ ಬೇರೆಯೇ ಒಂದು ತೆರನ ರೋಗಕಾರಿ ಸೂಕ್ಷ್ಮ ಜೀವಾಣುಗಳನ್ನು ಗುರುತಿಸಿದರು. ಆ ಜೀವಾಣುಗಳು ಹಳದಿ ಜ್ವರ ತರುವ ಜೀವಾಣುಗಳು ಅಲ್ಲವೇ ಅಲ್ಲ–ಎಂಬುದು ತಿಳಿಯಿತು. ಹೀಗಾಗಿ ಇದನ್ನು 'ಕ್ಯಾಸನೂರು ಕಾಡಿನ ಕಾಯಿಲೆ' ಎಂದು ಕರೆಯತೊಡಗಿದರು. ಅದಕ್ಕೆ ಕಾರಣವಾದ ಸೂಕ್ಷ್ಮ ಜೀವಾಣುಗಳು (ವೈರಸ್ಸುಗಳು) ಹಳದಿ ಜ್ವರ ಬರಿಸುವ ಸೂಕ್ಷ್ಮ ಅಣು ಜೀವಿಗಳಾಗಿರಲಿಲ್ಲ. ಆದರೂ, ಒಂದು ಜಾತಿಯ ಸೂಕ್ಷ್ಮ ಅಣುಗಳಿಂದಲೇ ಈ ಬೇನೆ ಮಂಗಗಳಿಗೂ ಮನುಷ್ಯರಿಗೂ ಹಬ್ಬುತ್ತದೆ ಎಂಬ ಅಭಿಪ್ರಾಯವೇನೋ ಸರಿ.

ಕಾಲಕ್ರಮದಲ್ಲಿ ಇಂಥ 'ಮಂಗನ ಕಾಯಿಲೆ', ಶಿವಮೊಗ್ಗ ಜಿಲ್ಲೆಯ ಸೊರಬದಿಂದ ಉತ್ತರ ಕನ್ನಡ ಜಿಲ್ಲೆಯ ಕಾಡು ಸಮೃದ್ಧವಾಗಿರುವ ಬೇರೆ ಕೆಲವು ಊರುಗಳಲ್ಲೂ ಕಾಣಿಸಿಕೊಂಡಿತು. ಆಗ ತಜ್ಞರು ಈ ರೋಗವನ್ನು ಹೇಗೆ ತಡೆಯುವುದೆಂಬ ಸಂಶೋಧನೆ ತೊಡಗಿದರು. ಪುಣೆಯ ರಾಷ್ಟ್ರೀಯ ವೈರಸ್ಸು ಸಂಶೋಧನಾ ಸಂಸ್ಥೆಯವರು ಇದನ್ನು ಕುರಿತು ಸಾಕಷ್ಟು ಅಧ್ಯಯನ ನಡೆಯಿಸಿ, ಇದನ್ನು ಹಬ್ಬಿಸುವ ಸೂಕ್ಷ್ಮ ಜೀವಾಣುಗಳು ಮಂಗಗಳಿಂದ ಮನುಷ್ಯರಿಗೆ ಹರಡದಂತೆ ಮಾಡಲು ಪ್ರಯತ್ನ ನಡೆಯಿಸಿದರು. ಸಿಡುಬು ಹಬ್ಬದಂತೆ, ಅದನ್ನು ಪ್ರತಿಭಟಿಸುವ ಲಸಿಕೆಯನ್ನು (Vaccine) ತಯಾರಿಸುವ ಕ್ರಮದಲ್ಲಿಯೇ ಇದಕ್ಕೂ ಲಸಿಕೆ ತಯಾರಿಸಿದರು. ಅದನ್ನು ಜನರಿಗೆ ಚುಚ್ಚಿದರೆ, ಮುಂದೆ ಕಪಿಗಳಿಂದ ಮನುಷ್ಯನನ್ನು ಸೇರುವ, ಈ ಬೇನೆಯ ವೈರಸ್ಸುಗಳನ್ನು ಹಿಮ್ಮೆಟ್ಟಿಸಬಹುದೆಂದು ಕಂಡುಹಿಡಿದರು. ಹಾಗೆ ಲಸಿಕೆ ಚುಚ್ಚಿಸಿಕೊಂಡ ಎಲ್ಲರನ್ನೂ ರೋಗ ತಟ್ಟದಂತೆ ಮಾಡಲು ಬರದೆ ಹೋದರೂ ಅರ್ಧದಷ್ಟು ಜನರಿಗಾದರೂ ರೋಗ ಬಾರದಂತೆ ತಡೆಯಬಹುದು–ಎಂಬುದು ಅವರ ಅಭಿಪ್ರಾಯ.

## ರೋಗಾಣುವನ್ನು ಹಬ್ಬಿಸುವ ವೈರಸ್ಸುಗಳು

ಆಫ್ರಿಕಾದ ಹಳದಿ ಜ್ವರ ರೋಗಿಷ್ಟ ಮಂಗಗಳನ್ನು ಕಡಿದ ಸೊಳ್ಳೆಗಳು, ಮನುಷ್ಯರನ್ನು ಕಡಿದಾಗ, ಅದೇ ರೋಗ ಅವರಿಗೆ ಹಬ್ಬುವಂತೆ, ನಮ್ಮ ಕಾಡುಗಳಲ್ಲಿ ಸೊಳ್ಳೆಗಳಿದ್ದರೂ ಅವುಗಳಿಂದ ಇದು ಹಬ್ಬುವುದಿಲ್ಲವಂತೆ. ಮಲೇರಿಯಾ ಬೇನೆಯನ್ನು ಸೊಳ್ಳೆಗಳು ಮನುಷ್ಯರಿಂದ ಮನುಷ್ಯರಿಗೆ ಹಬ್ಬಿಸುತ್ತವೆ. ಆದರೆ ಮಂಗನ ಕಾಯಿಲೆಗೆ ಸೊಳ್ಳೆಗಳು ಮಧ್ಯವರ್ತಿಗಳಲ್ಲ. ಇಲ್ಲಿ ಈ ರೋಗದ ವೈರಸ್ಸುಗಳನ್ನು ಹೊತ್ತು ಮಂಗನಿಂದ ಮನುಷ್ಯರಿಗೆ ಹಬ್ಬಿಸುವ ಮಧ್ಯವರ್ತಿ ಪ್ರಾಣಿ ಎಂದರೆ ಉಣ್ಣಿ ಅಥವಾ ಉಣುಗು ಎಂಬುದು ತಿಳಿದು ಬಂತು. ಮಂಗನ ಸಾವಿಗೆ ಕಾರಣವಾದ ಉಣುಗುಗಳು, ಅವುಗಳ ದೇಹಕ್ಕೆ ಅಂಟಿಕೊಂಡುದುದನ್ನು ಹೆಕ್ಕಿ ತಂದು ಪರಿಶೀಲಿಸಿದರು.

## ಉಣುಗು (ಉಣ್ಣಿ)

ಉಣುಗು ನಮ್ಮೆಲ್ಲರಿಗೂ ತಿಳಿದಿರುವ ಒಂದು ಜೀವಜಾತಿ. ಎಂಟುಕಾಲಿನ ಈ ಕೀಟ, ಒಂದು ಕಾಳಿನಂತೆ ಕಾಣುವ ಜೀವಿ, ನಮ್ಮ ಮನೆಯ ನಾಯಿ, ದನಗಳನ್ನು ಕಚ್ಚಿ, ಅವುಗಳ ರಕ್ತಹೀರಿ ಬದುಕುವಂಥ ಪ್ರಾಣಿ. ಮಂಗನ ಕಾಯಿಲೆಗೆ ಕಾರಣವಾದ ಉಣುಗುಗಳೂ ದನಕರು, ಆಡು, ಜಿಂಕೆಗಳನ್ನು, ಕಡಿಯಬಹುದು. ಏಕೆಂದರೆ ಉಣುಗುಗಳಿಗೆ ಪಶು–ಪಕ್ಷಿಗಳ ರಕ್ತವೇ ಆಹಾರ! ಆದರೆ ಮಂಗನ ಕಾಯಿಲೆಯ ರೋಗವನ್ನು ಹೊತ್ತ ಉಣುಗುಗಳು ದನ, ಕರು, ಆಡುಗಳನ್ನು ಕಡಿದರೂ ಅವಕ್ಕೆ ಬಾಧೆ ತಟ್ಟುವುದಿಲ್ಲ. ಉಣುಗುಗಳಲ್ಲೂ ಎಷ್ಟೆಷ್ಟೋ ಜಾತಿಗಳಿವೆ. ಅವುಗಳ ಶರೀರವನ್ನು ಸೇರುವ ರೋಗಾಣುಗಳಲ್ಲೂ ಬೇರೆ ಬೇರೆ ಜಾತಿಗಳಿವೆ.

## ಉಣುಗುಗಳ ಜೀವನ

ಉಣುಗುಗಳಲ್ಲಿ ಹಲವಾರು ಜಾತಿಗಳಿವೆ. ಸಾಸಿವೆಯಷ್ಟು ಸಣ್ಣವು ಅದಕ್ಕಿಂತ ಸಣ್ಣವೂ ಇರುವಂತೆ, ಅಲಸಂಡೆ ಕಾಳಿನಷ್ಟು ದೊಡ್ಡವೂ ಇವೆ. ಅವುಗಳ ಶರೀರ ಚೀಲದಂತೆ ಜಿಗುಟು; ನುರಿದರೆ ಸಾಯದಷ್ಟು ಜಿಗುಟಾಗಿರುತ್ತವೆ. ಅವಕ್ಕೆ ಎಂಟು ಕಾಲುಗಳಿವೆ. ಅವುಗಳಿಂದ ಆಚೀಚೆ ಸರಿಯಲು ಅನುಕೂಲ

ವಾಗುತ್ತದೆ. ನಿಜ, ಆದರೆ ಅವುಗಳ ಹೆಚ್ಚಿನ ಸಂಚಾರ ಪಶು–ಪಕ್ಷಿಗಳಿಗೆ ಅಂಟಿಕೊಂಡು ಸವಾರಿ ಮಾಡುವುದು. ಹಾಗೆ ಆಸರೆ ಕೊಟ್ಟ ಪ್ರಾಣಿಗೆ ಅಂಟಕೊಂಡು ಅದರ ರೋಮಗಳ ಎಡೆಯಲ್ಲಿ ಹುದುಗಿ, ಅದನ್ನು ಕಚ್ಚಿ ರಕ್ತ ಹೀರಿ ಹೊಟ್ಟೆ ತುಂಬಿಸಿಕೊಳ್ಳುತ್ತದೆ. (ಇಂಥ ಗಂಡು, ಹೆಣ್ಣು ಉಣ್ಣಿಗಳು ತಾವು ಬಿಡಾರ ಹೂಡಿದ ಪ್ರಾಣಿಯ ಮೈಮೇಲೆ ಜೋಡಿ ಆಗುತ್ತವೆ.)

ತಮ್ಮ ಕೆಲಸ ಆದಮೇಲೆ ಅವು ಸವಾರಿ ಮಾಡುತ್ತಿರುವ ದನ,-ಕರು, ನಾಯಿ ಹಕ್ಕಿಗಳಿಂದ ಉದುರಿ ಬೀಳುತ್ತವೆ. ಬಿದ್ದು ಗಿಡಮರಗಳ ಎಲೆ, ಹುಲ್ಲು ತರಗೆಲೆಗಳಿಗೆ ಅಂಟಿಕೊಂಡು ಅಡಗಿರುತ್ತವೆ. ಅವು ಇದ್ದ ದಾರಿಯಲ್ಲಿ ಓಡಾಡುವ ಪಶು ಪಕ್ಷಿಗಳ ದೇಹ ಸಮೀಪವಾದಾಗ, ಕಾದುಕುಳಿತು ಪುನಃ ಅವುಗಳ ಮೇಲೆ ಹಾರಿ ಸವಾರಿ ಮಾಡುತ್ತವೆ. ಮುಂದಿನ ಊಟ ಮತ್ತು ಬಿಡಾರ ಅಲ್ಲಿ.

ಎಲ್ಲ ಕೀಟಗಳಂತೆ ಅವಕ್ಕೂ ಜೀವನದ ಬೇರೆ ಬೇರೆ ಅವಸ್ಥೆಗಳಿವೆ. ಅವುಗಳ ಮೊಟ್ಟೆ ಬಲು ಸೂಕ್ಷ್ಮ; ಅವು ಬಿದ್ದಲ್ಲಿಯೇ ಧೂಳಿನಂತೆ ಬಿದ್ದಿದ್ದು ಅನುಕೂಲ ಹವೆ ಮತ್ತು ಸಮಯ ದೊರೆತಾಗ ಪುಟ್ಟ ಮರಿಗಳಾಗಿ ಹೊರಬರುತ್ತವೆ. ಮೊಟ್ಟೆ ಮರಿಯಾಗಲು ದೀರ್ಘಕಾಲ ಹಿಡಿಯಲೂಬಹುದು. ಚುರುಕಿನಿಂದ ಓಡಾಡಬಲ್ಲ ಆ ಮರಿಗಳು ನೆಲದ ಹುಲ್ಲು, ಗಿಡಗಂಟಿಗಳನ್ನೇರಿ ಕಾದಿದ್ದು ಅಲ್ಲಿ ಹಾದುಹೋಗುವ ಪಶುಪಕ್ಷಿಗಳ ಮೇಲೆ ಸವಾರಿ ಮಾಡುತ್ತಾ ಅವುಗಳ ರಕ್ತ ಹೀರುತ್ತವೆ. ಆ ಕಾಲಕ್ಕೆ ಅವುಗಳಲ್ಲಿ ಕಾಯಿಲೆ ತರುವ ರೋಗಾಣುಗಳೂ ಸೇರಿರಬಹುದು.

ಅವುಗಳ ಮುಂದಿನ ಬೆಳವಣಿಗೆಯಲ್ಲಿಯೂ ಅವು ಅದೇ ರೀತಿಯ ಜೀವನ ನಡೆಸುತ್ತವೆ. ಆದರೆ ಆಗ ಅವು ಗಂಡೂ ಅಲ್ಲ ಹೆಣ್ಣೂ ಅಲ್ಲದ ಷಂಡ(ನಪುಂಸಕ) ಮರಿಗಳು. ಈ ಮರಿಗಳೇ ತುಂಬಾ ಅಪಾಯಕಾರಿ; ಅವುಗಳಲ್ಲಿ ಸೇರಿಕೊಂಡು ವೃದ್ಧಿಸುವ ರೋಗದ ಸೂಕ್ಷ್ಮ ಜೀವಾಣುಗಳು–ಅವು ಕಡಿದ ಪ್ರಾಣಿಗಳಿಂದ ಪ್ರಾಣಿಗಳಿಗೆ ಹಬ್ಬುವದೇ ಮಂಗನ ಕಾಯಿಲೆಗೆ ಮುಖ್ಯ ಕಾರಣ. ಈ ಷಂಡ ಉಣುಗುಗಳೇ ಮುಂದಣ ಅವಸ್ಥೆಯಲ್ಲಿ ಗಂಡು, ಹೆಣ್ಣು ಉಣುಗುಗಳಾಗುತ್ತವೆ. ಆಗ ಅವುಗಳ ದೇಹ ಬಲಿಯುತ್ತದೆ. ಗಂಡು ಉಣುಗು ಹೆಣ್ಣನ್ನು ಅರಸಿಕೊಂಡು ಹೋಗುತ್ತದೆ. ಆ ಕಾಲದಲ್ಲಿ ಅವು ಇದ್ದಲ್ಲೇ ಇದ್ದು ರಕ್ಷಣೆ

ಕೊಟ್ಟ ಪ್ರಾಣಿಯ ರಕ್ತ ಹೀರಿ ಕಾಳಿನಂತೆ ಬಲಿಯುತ್ತವೆ. ಅಲ್ಲಿ ಗರ್ಭ ತಾಳಿದ ಹೆಣ್ಣು ಉಣುಗು, ಆ ಸ್ಥಿತಿಯಲ್ಲಿ ಉದುರಿ, ನೆಲಕ್ಕೆ ಬಿದ್ದರೆ, ಅಲ್ಲೇ ತರಗೆಲೆಗಳ ಡಿಯಲ್ಲಿ ಮೊಟ್ಟೆ ಇಟ್ಟು ಸತ್ತು ಹೋಗುತ್ತದೆ.

ಬಲಿತ ಗಂಡು ಹೆಣ್ಣು ಉಣುಗುಗಳಿಂದ ಮಂಗನ ಕಾಯಿಲೆ ಮನುಷ್ಯರಿಗೆ ಹಬ್ಬುವುದಿಲ್ಲ ಎನ್ನುತ್ತಾರೆ. ಚುರುಕಾಗಿ ಓಡಾಡುವ, ಸಾಸಿವೆ ಕಾಳಿನ ಗಾತ್ರದ ಷಂಡ ಉಣುಗುಗಳೇ ರೋಗ ಹಬ್ಬಿಸುವಂಥವು.

ಹಾಗಾದರೆ ಜನರ ಸಂಪರ್ಕಕ್ಕೆ ಬರುವ, ಅವರು ಸಾಕುವ ದನ, ಕರು ಮೊದಲಾದುವುಗಳಿಂದ ಉದುರುವ ಉಣುಗುಗಳನ್ನು ನಿವಾರಿಸುವ ಕೆಲಸ ರೋಗ ನಿವಾರಣೆಯಲ್ಲಿ ಮುಖ್ಯ. ಆ ಉಣುಗುಗಳು ಮೊಟ್ಟೆ ಇಡಬಾರದು! ಮೊಟ್ಟೆಗಳಿಂದ ಮರಿಗಳೂ, ಅವುಗಳ ಮುಂದಿನ ಅವಸ್ಥೆಗಳೂ ಕಾಣಿಸದಂತೆ ತಡೆಯು ಬೇಕಾಗುತ್ತದೆ.

ಇದಕ್ಕೆ ಉಣುಗುಗಳನ್ನು ನಿವಾರಿಸುವ ಸತತ ಪ್ರಯತ್ನ ಬೇಕು. ಉಣುಗು ಬಿದ್ದಿರುವ ಪ್ರದೇಶದಲ್ಲಿ ಕೀಟನಾಶಿ ಔಷಧಗಳನ್ನು ಚಿಮುಕಿಸಬೇಕು. ಜಾನುವಾರುಗಳ ಮೈಯಿಂದಲೂ ಉಣ್ಣೆಗಳನ್ನು ನಾಶಪಡಿಸಬೇಕು.

## ರೋಗದ ಲಕ್ಷಣಗಳು

ಮಂಗನ ಕಾಯಿಲೆಯ ಲಕ್ಷಣಗಳು ತುಂಬಾ ವಿಚಿತ್ರ. ಮನುಷ್ಯರಿಗೆ ಉಣುಗು ಕಡಿದ ಆರೇಳು ಗಂಟೆಗಳೊಳಗಾಗಿ ರೋಗ ತೊಡಗುತ್ತದೆ. ರೋಗಕ್ಕೆ ಕಾರಣವಾದ ಉಣುಗು ಕಚ್ಚುವುದಾಗಲೀ, ಅದು ಮೈಗೆ ಅಂಟಿಕೊಳ್ಳುವುದಾಗಲೀ ತಿಳಿಯದೆ ಹೋಗುತ್ತದೆ. ಮುಂದೆ ಬರುವ ಲಕ್ಷಣಗಳೆಲ್ಲ ಅದರ ಕಡಿತದಿಂದ ಉಂಟಾಯಿತು ಎಂದು ಊಹಿಸುವುದೂ ಕೂಡ ಕಷ್ಟ. ಅದು ಕಡಿದ ಎರಡರಿಂದ ಏಳು ದಿನಗಳೊಳಗಾಗಿಯೇ ಜ್ವರ ಏರುತ್ತದೆ; ಜ್ವರದ ಜತೆಗೆ ಚಳಿ ಕಾಣಿಸಿಕೊಂಡೀತು, ತಲೆನೋವು ಕಾಣಿಸಿಕೊಂಡೀತು. ಜ್ವರವು ವಿಪರೀತವಿದ್ದು; ಅದು 104°Fಯ ತನಕ ಏರೀತು, ಮುಂದೆ ಐದರಿಂದ ಹನ್ನೆರಡು ದಿನಗಳ ತನಕವೂ ಜ್ವರ ಉಳಿದೀತು. ಆ ಕಾಲಕ್ಕೆ ತಲೆನೋವಿನ ಜತೆಗೆ

ಮೈ ಕೈನೋವೂ ಬಂದೀತು. ಈ ಅವಧಿಯಲ್ಲಿ ಇದು ಯಾವ ಕಾಯಿಲೆ, ಎಂದು ಊಹಿಸುವುದು ಕಷ್ಟ. ಚಳಿ ಮತ್ತು ಜ್ವರ ಸೇರಿದರೆ 'ಮಲೇರಿಯಾ ಇದ್ದೀತೆ?' ಎಂಬ ಅನುಮಾನ ಮೂಡೀತು. ತಲೆಸಿಡಿತ, ಜ್ವರಗಳು ಕೂಡಿದರೆ ಫ್ಲೂ ಇರಬಹುದೇ, ಅಥವಾ ಶೀತಜ್ವರವೇ– ಎಂಬ ಶಂಕೆ ಹುಟ್ಟುತ್ತದೆ. ಜ್ವರ ವಾರಕ್ಕಿಂತಲೂ ಮೀರಿದಾಗ ಅದು 'ಸನ್ನಿಪಾತ ಜ್ವರವೇ' ಎಂಬ ಅನುಮಾನ ಕಾಣಿಸುವ ಸಾಧ್ಯತೆ ಇದೆ. ನಾವು ವೈದ್ಯರಲ್ಲಿಗೆ ಹೋದರೂ, ಅವರೂ ಇಂಥ ಅನುಮಾನಕ್ಕೆ ಗುರಿಯಾಗಿ ಮದ್ದು ಕೊಡಬಹುದು. ಆದರೆ, ಮಂಗನ ಕಾಯಿಲೆ ಹಬ್ಬಿರುವ ಪ್ರದೇಶದ ಜನರು ಮತ್ತು ವೈದ್ಯರು ಈ ವಿಷಯದಲ್ಲಿ ಮಾತ್ರ ಉದಾಸೀನರಾಗಬಾರದು.

ಜ್ವರದ ಜತೆಗೆ ಮೈನೋವು ಕಾಣಿಸಿಕೊಂಡಿತು ಎಂದರೆ ಅದು ಹೆಚ್ಚಿ, ಕತ್ತಿನ ಹಿಂಬದಿ, ಬೆನ್ನಿನ ಕೆಳಭಾಗ, ಕಾಲಿನ ಕೆಳಭಾಗಗಳಲ್ಲೆಲ್ಲ ಸೆಳೆತ ಕಾಣಿಸೀತು. ಇವುಗಳ ಜೊತೆಯಲ್ಲಿ ಹೊಟ್ಟೆನೋವು ಬಂದೀತು! ಕೆಮ್ಮು ಬರತೊಡಗಬಹುದು. ಬೇನೆ ತೊಡಗಿದ ಮೂರುನಾಲ್ಕು ದಿನಗಳಲ್ಲಿಯೇ ವಾಂತಿಯೂ ಬರಬಹುದು. ಹೀಗೆ ಎರಡು ಮೂರು ಕಾಯಿಲೆಗಳ ಲಕ್ಷಣ ಒಮ್ಮೆಗೇ ಕಾಣಿಸಿಕೊಳ್ಳುವ ಈ ಮಂಗನ ಕಾಯಿಲೆ, ನಿಜಕ್ಕೂ ಗಾಬರಿ ಪಡಬೇಕಾದ ಬೇನೆಯೇ. ಅದು ರೋಗಿಗೂ ಗಾಬರಿ ಹುಟ್ಟಿಸುವಂಥದು, ವೈದ್ಯರಿಗೂ ಗಾಬರಿ ಹುಟ್ಟಿಸುವಂಥದು.

ಕೆಲವು ರೋಗಿಗಳಲ್ಲಿ ರೋಗ ತೊಡಗಿದ ಮೂರು ದಿನಗಳಲ್ಲಿ ಮೂಗು, ವಸಡು, ಕರುಳುಗಳಿಂದ ರಕ್ತಸ್ರಾವ ಉಂಟಾಗಬಹುದು. ಹಾಗೆ ಎಲ್ಲರಿಗೂ ರಕ್ತಸ್ರಾವವಾಗುತ್ತದೆಂಬ ನಿಯಮವಿಲ್ಲ. ಕೆಲವರಿಗೆ ಜ್ವರದ ಜತೆಯಲ್ಲೇ ಇಂಥ ರಕ್ತಸ್ರಾವ ಆದರೆ, ಇನ್ನು ಕೆಲವರಿಗೆ ಜ್ವರ ಇಳಿದ ಮೇಲೆ ರಕ್ತಸ್ರಾವ ಕಾಣಿಸೀತು.

## ರಕ್ತಸ್ರಾವ ಗುರುತಿಸುವ ಬಗೆ

ಮೂಗು, ವಸಡುಗಳಲ್ಲಿ ಆಗುವ ರಕ್ತಸ್ರಾವ ಕಣ್ಣಿಗೆ ಕಾಣಿಸುತ್ತದೆ. ಗಂಟಲಿನಲ್ಲಿ ಸ್ರಾವವಾದರೆ ಕಫದ ಜತೆಗೆ ರಕ್ತ ಕಾಣಿಸುತ್ತದೆ. ಕರುಳಿನೊಳಗೆ

ರಕ್ತಸ್ರಾವ ಕಾಣಿಸಿದರೆ ರೋಗಿಯ ಮಲ ಕಪ್ಪಾಗಿ ಕಾಣಿಸುತ್ತದೆ. ಹೀಗೆ ಮಲವನ್ನೋ ಕಫವನ್ನೋ ಪರೀಕ್ಷಿಸಿ ರಕ್ತಸ್ರಾವ ಇದೆಯೇ, ಇಲ್ಲವೇ– ಎಂದು ಗುರುತಿಸುವ ಕೆಲಸ ಬಹಳ ಮುಖ್ಯ. ರೋಗಿಯ ದೇಹದಿಂದ ಹೆಚ್ಚು ರಕ್ತ ಸ್ರಾವವಾದರೆ, ಆತನಿಗೆ ಬೇರೆಯವರ ರಕ್ತವನ್ನು ಕೊಟ್ಟು ಅವನನ್ನು ಬದುಕಿಸ ಬೇಕಾದೀತು. ಅದೊಂದೇ ಆತನನ್ನು ಉಳಿಸುವ ದಾರಿ.

ಈ ಕಾಯಿಲೆ ಅಂಟಿದ ರೋಗಿ, ತೀಕ್ಷ್ಣ ಜ್ವರದಿಂದ ಹಾಸಿಗೆ ಹಿಡಿದೇ ಹಿಡಿಯುತ್ತಾನೆ. ಅವನ ಕಣ್ಣೆಲ್ಲ ಕೆಂಪಾಗುತ್ತದೆ. ಅವನಲ್ಲಿ ನಿತ್ರಾಣ ಹೆಚ್ಚು ತ್ತದೆ. ಕಾಯಿಲೆಯಿಂದ ಅವನ ಶರೀರದಲ್ಲಿ ತುಂಬಿಕೊಳ್ಳುವ ನಂಜು ಅವನ ಕಂಕುಳ ಮತ್ತು ತೊಡೆ ಸಂದಿಗಳಲ್ಲಿ ಗಳಲೆಯ ರೂಪದಲ್ಲಿ ಊದಿಕೊಳ್ಳುತ್ತದೆ. ನಾಲಿಗೆಯ ಕೆಳಗಡೆ ಚಿಕ್ಕ ಚಿಕ್ಕ ಬೊಕ್ಕೆಗಳೂ ಕಾಣಿಸಬಹುದು. ಜ್ವರ ಏರಿದಂತೆ ನಾಡಿಯ ಬಡಿತ ಮೆಲ್ಲಗೆ ಆಗುತ್ತಾ ಸರಿಯಬಹುದು. ಇಂಥ ಸ್ಥಿತಿ ಒಂಬತ್ತು ಹತ್ತು ದಿನಗಳ ಕಾಲ ಮುಂದುವರಿಯಬಹುದು. ಆದರೂ, ಇವೇ ಚಹರೆ ಗಳೂ ಎಲ್ಲಾ ರೋಗಿಗಳಲ್ಲೂ ಕಾಣಿಸಬೇಕೆಂದಿಲ್ಲ. ಕೆಲವರಲ್ಲಿ ಅದು 5ರಿಂದ 12 ದಿನಗಳವರೆಗೆ ಇದ್ದು, ಅನಂತರ ಜ್ವರ ಇಳಿಯುತ್ತದೆ; ನಾಡಿಯ ಬಡಿತವೂ ಇಳಿಯುತ್ತದೆ. ಕೆಲವರಲ್ಲಿ ಹಾಗಾಗದಿರುವುದೂ ಉಂಟು. ಜ್ವರ ಇಳಿಯು ತ್ತಿರುವಾಗ ರಕ್ತದ ಒತ್ತಡ ಹೆಚ್ಚುವುದೂ ಉಂಟು! ಹೀಗೆ ಒಬ್ಬರಲ್ಲಿ ಕಾಣಿಸಿದ ಚಿಹ್ನೆ ಇನ್ನೊಬ್ಬರಲ್ಲಿ ಕಾಣಿಸದೇ ಹೋಗುವುದರಿಂದ, ಇದೊಂದು ವಿಚಿತ್ರ ಕಾಯಿಲೆ ಎನ್ನಲೇಬೇಕು. ಕೆಲಕೆಲವು ರೋಗಿಗಳಲ್ಲಿ ಪಚನಾಂಗಗಳಾದ ಯ ಕೃತ್ತು ಮತ್ತು ಪ್ಲೀಹಗಳೂ, ಈ ರೋಗದ ಅವಧಿಯಲ್ಲಿ ಬಾತುಕೊಳ್ಳುತ್ತವೆ.

ಈ ಕಾಯಿಲೆಗೆ ಸಂಬಂಧಿಸಿದ ಜ್ವರ ಮತ್ತು ಇತರ ಚಿಹ್ನೆಗಳು ಮಾಯ ವಾಗಿ ರೋಗ ಮಾಸಿತು ಎಂದು ಕಾಣಿಸಿದ ಬಳಿಕವೂ ಇನ್ನೊಮ್ಮೆ ಅದೇ ಕಾಯಿಲೆ ಮರುಕಳಿಸುವುದು ಕಂಡುಬಂದಿವೆ. ಈ ಬೇನೆಯಲ್ಲಿ ರಕ್ತಸ್ರಾವ ಉಂಟಾಗುತ್ತ ಹೋಗುವುದರಿಂದ, ರೋಗಿ ದುರ್ಬಲನಾಗುತ್ತಾನೆ. ಅದರಿಂದ ಮೈ ನಡುಕ ಹುಟ್ಟೀತು; ಉಸಿರಾಟ ಕಷ್ಟವಾದೀತು; ಕೊನೆಗೆ ಸಾವೂ ಸಂಭವಿಸೀತು.

ಸಾಮಾನ್ಯವಾಗಿ ಈ ಕಾಯಿಲೆಯ ಅವಧಿ ಇಷ್ಟೇ ದಿನ ಎಂದು ಖಚಿತ ವಾಗಿ ಹೇಳುವಹಾಗಿಲ್ಲ. ಅದು ಒಮ್ಮೆ ಮಾಯವಾಯಿತೆಂದರೂ, ತಿರುಗಿ ತೊಡ

ಗಬಹುದು. ಒಮ್ಮೆ ಕಾಯಿಲೆ ಗುಣವಾದರೂ, ರೋಗಿ ಚೇತರಿಸಿಕೊಳ್ಳಲು ಬಹಳ ದಿನ ಹಿಡಿದೀತು. ಈ ಯಾವತ್ತೂ ಅವಧಿಯಲ್ಲಿ ರೋಗಿಯ ಆರೈಕೆಯ ಕೆಲಸವನ್ನು ಬಹಳ ಎಚ್ಚರಿಕೆಯಿಂದ ಮಾಡಬೇಕಾದೀತು. ಚಿಕ್ಕ ಪುಟ್ಟ ಕಾಯಿಲೆಗಳಿಗೆ ಮಾಡುವಂತೆ ಏನಾದರೂ ಊರಿನ ಔಷಧ ಮಾಡಿ ಈ ರೋಗವನ್ನು ಪರಿಹರಿಸಲು ಖಂಡಿತಕ್ಕೂ ಬರಲಾರದು. ಈ ಕಾಯಿಲೆಯ ವಿಚಾರವನ್ನು ಬಲ್ಲ ವೈದ್ಯರ ಸಲಹೆ ಕೇಳುತ್ತಾ, ಅವರು ಹೇಳುವ ಉಪಚಾರಗಳನ್ನು ಮಾಡಿಯೇ, ಕಾಯಿಲೆಯ ಅವಧಿ ಕಳೆಯಬೇಕು. ಅನಂತರವೂ ಸ್ವಲ್ಪಕಾಲ ಯೋಗ್ಯ ಶುಶ್ರೂಷೆ ಮಾಡಿ ರೋಗಗ್ರಸ್ಥನನ್ನು ರಕ್ಷಿಸಬೇಕು.

## ರೋಗ ಪ್ರಸಾರದ ವಿಧಾನ

ಈ ಕಾಯಿಲೆ ಉಣುಗುಗಳ ಮೂಲಕ ಮಂಗಗಳಿಗೂ, ಮನುಷ್ಯರಿಗೂ ಹಬ್ಬುತ್ತದೆ- ಎಂದೆವು. ಈ ಕಾಯಿಲೆ ನಮ್ಮ ದೇಶದಲ್ಲಿ—ಮೊದಲ ಬಾರಿಗೆ ಸೊರಬ ತಾಲೂಕಿನ ಕ್ಯಾಸನೂರಿನಲ್ಲಿ ಕಾಣಿಸಿಕೊಂಡಿತು. ಮುಂದೆ ಅದು ಸಾಗರ, ಶಿಕಾರಿಪುರ ತಾಲೂಕಿನ ಕೆಲವು ಹಳ್ಳಿಗಳಲ್ಲಿ ಹಬ್ಬಿತು. ಇದರ ಕ್ಷೇತ್ರ ವಿಸ್ತರಿಸಿತು. 1972ರಲ್ಲಿ ಅದು ಶಿರಸಿ ತಾಲೂಕಿನ ಒಂದೆರಡು ಗ್ರಾಮಗಳಿಗೂ ಪಸರಿಸಿತು. ಅಲ್ಲಿ ಆರಂಭದಲ್ಲಿ ಆ ಕಾಯಿಲೆಗೆ ಬಲಿಯಾದವರ ಸಂಖ್ಯೆ ಹೆಚ್ಚಿದ್ದರೂ, ಕಾಲಕ್ರಮದಲ್ಲಿ ರೋಗದ ತೀಕ್ಷ್ಣತೆ ಕಡಿಮೆಯಾದಂತಿದೆ. ಮಳೆಗಾಲದಲ್ಲಿ ಅದರ ಬಾಧೆ ಇರುವುದಿಲ್ಲ. ವರ್ಷದ ಉಳಿದ ಕಾಲದಲ್ಲಿ ಅದು ಹೆಚ್ಚುತ್ತದೆ. 1975ರಲ್ಲಿ ಅದು ತೀರ್ಥಹಳ್ಳಿಯ ಒಂದೆರಡು ಹಳ್ಳಿಗಳಲ್ಲಿ ಕಾಣಿಸಿತು. ಅನಂತರದ ಆರೇಳು ವರ್ಷಗಳ ಬಳಿಕ ಈ ಪ್ರದೇಶದಿಂದ ದೂರವಾಗಿರುವ ದ. ಕ. ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಕೆಲವು ಗ್ರಾಮಗಳಲ್ಲಿ ಕಾಣಿಸಿಕೊಂಡಿತು, ಇಷ್ಟು ದೂರದಲ್ಲಿ ಕಾಣಿಸಿಕೊಳ್ಳಲು ಕಾರಣವೇನೆಂದರೆ-ಈ ಎರಡು ಸ್ಥಳಗಳ ನಡುವಣ ಅರಣ್ಯಗಳೊಳಗಿನ ಮರಗಳನ್ನು ಕಡಿಯುತ್ತಾ ಹೋದಂತೆ. ಅಲ್ಲಿ ವಾಸಿಸುತ್ತಿರುವ ಕಪಿಗಳು, ತಮ್ಮ ಜೀವನ ಸಾಗಿಸುವುದಕ್ಕೆ ದೂರ ಪ್ರದೇಶಗಳಿಗೆ ವಲಸೆ ಬಂದುದೇ ಕಾರಣ. ಆ ಕಪಿಗಳು ಸೇರಿದ ಕಾಡು ಪ್ರದೇಶಗಳಲ್ಲಿ ಈ ಕಾಯಿಲೆ ಹಬ್ಬತೊಡಗಿತು.

ಕಾಯಿಲೆ ಕರ್ನಾಟಕದ ಅರಣ್ಯ ಪ್ರದೇಶದಿಂದ, ಭಾರತದ ಇನ್ನಿತರ



ಪಟ್ರಮೆಯಲ್ಲಿ ದಿಢೀರ್ ಕಡಿದು ಮಾಯವಾದ ಕಾಡು... (ಇದೇ ಮಂಗನಕಾಯಿಲೆಗೆ ಪ್ರಚೋದನೆ)

ಮೃತ್ಯುವಿನ ನಡುವೆಯೇ ಮನೆ ಮಾಡಿಕೊಂಡಿರುವ ಮುಗ್ಧರು.



ಧರ್ಮಸ್ಥಳದ ಲ್ಯಾಲ ಆಸ್ಪತ್ರೆಯಲ್ಲಿ ಕ್ಯಾಲೆಯಿಂದ ನರಳುತ್ತಿರುವ ಮಕ್ಕಳಿಗೆ ಆರೈಕೆ.



ಹೆಂಗಸರೂ ಮಕ್ಕಳೂ ಬಹಳಷ್ಟು ಬಲಿಯಾದರು.

'ರಕ್ತದಾನ' ಮಂಗನ ಕ್ಯಾಲೆಗೆ ಅತ್ಯಂತ ಶ್ರೇಷ್ಠವಾದ ದಾನ.



ಪುಣೆ ರಾಷ್ಟ್ರೀಯ ವಿಷಾಣು ಸಂಸ್ಥೆಯ ಡೈರೆಕ್ಟರ್ ಡಾ. ಪಾವ್ರಿ "ಮಂಗನಕ್ಯಾಲೆ" ಪುಸ್ತಕ ಬಿಡುಗಡೆ ಮಾಡಿದಾಗ (23–2–84).



ಹಸುರೆಲೆಯ ಅಡಿಯಲ್ಲಿ ಕುಳಿತು ಜಾನುವಾರುಗಳ ಬರವಿಗಾಗಿ ಕಾಯುತ್ತಿರುವ 'ಬೂಫಿಲಸ್' ಮರಿಉಣ್ಣೆಗಳು. (ವಿಸ್ತರಿಸಿದ ಚಿತ್ರ).

ಪ್ರಾಂತ್ಯಗಳಿಗೆ ಹಬ್ಬಿಲ್ಲ, ಎಂಬುದೊಂದೇ ಸಮಾಧಾನ. ಕಾಡುಗಳಿರುವಲ್ಲಿ ಗಿಡ ಗಳಿರುವಲ್ಲಿ ಅಲ್ಲಿನ ತರಗೆಲೆಗಳಲ್ಲಿ, ಕಾಡಿನ ಯಾವತ್ತು ಪರಿಸರದಲ್ಲಿ ಉಣ್ಣುಗು ಗಳು ಸೇರಿಕೊಳ್ಳುತ್ತವೆ. ಅಲ್ಲಿ ಅವು ತಮ್ಮ ಸಂತಾನ ಹೆಚ್ಚಿಸುತ್ತವೆ. ಅನ್ಯ ಪ್ರಾಣಿಗಳ ಮೈಯನ್ನು ಸೇರಿಕೊಂಡು. ಅವುಗಳ ರಕ್ತಹೀರಿ ಜೀವಿಸುತ್ತವೆ. ಉಣ್ಣುಗುಗಳ ಸಂಪರ್ಕವಿಲ್ಲದೆಯೇ ಮನುಷ್ಯರಿಗೆ ಆ ರೋಗ ತಟ್ಟುವುದಿಲ್ಲ. ರೋಗ ತಟ್ಟಿದ ಬಳಿಕ ಯೋಗ್ಯ ಆರೈಕೆಯೊಂದೇ ಅವರನ್ನು ಕಾಪಾಡುವ ವಿಧಾನ.

## ಲಸಿಕೆ

ಸಾಮಾನ್ಯವಾಗಿ ಈ ಮೊದಲು ಹೇಳಿದಂತೆ, ಮೈಲಿಗೆ ಇಲ್ಲವೆ ಸಿಡುಬಿಗೆ ಲಸಿಕೆಯನ್ನು ತಯಾರಿಸುವಂತೆ, ಇದಕ್ಕೂ ಲಸಿಕೆಯನ್ನು ತಯಾರಿಸತೊಡಗಿದರು. ಸಾಮಾನ್ಯವಾಗಿ. ಯಾವುದೇ ಪ್ರಾಣಿಯ ದೇಹಕ್ಕೆ ಹೊರಗಿನ ರೋಗಾಣುಗಳು ನಾಟಿದಾಗ, ಆ ದೇಹದ ರಕ್ತ ಆ ರೋಗಾಣುವಿನೊಡನೆ ಹೋರಾಡಲು ಯೋಗ್ಯ ಪ್ರತಿವಿಷವನ್ನು ತಯಾರಿಸುತ್ತದೆ. ಆ ಪ್ರತಿವಿಷದ ಶಕ್ತಿ ಸಾಲದಾ ದಾಗ, ಆ ಪ್ರಾಣಿ ರೋಗಕ್ಕೆ ಬಲಿಯಾಗುತ್ತದೆ. ಅಂತಹ ರೋಗಾಣುಗಳನ್ನು ಆಯ್ದು, ಅವನ್ನು ತಡೆಯಬಲ್ಲ ಪ್ರಾಣಿಗಳಿಗೆ ಚುಚ್ಚಿ ಅವುಗಳಿಂದ ಲಸಿಕೆಯನ್ನು ಪಡೆಯುತ್ತಾರೆ. ನಾಳೆದಿನ ಮನುಷ್ಯರಿಗೆ ಅಂತಹ ರೋಗ ಬರಬಾರದೆಂದು, ಅಂಥ ಲಸಿಕೆಯನ್ನು ಮನುಷ್ಯರಿಗೆ ಚುಚ್ಚುವ ಕ್ರಮವಿದೆ. ಆ ಲಸಿಕೆಯ ರೋ ಗಾಣುವಿನ ಶಕ್ತಿ ದುರ್ಬಲವಾಗಿರುತ್ತದೆ. ಆ ಲಸಿಕೆಯನ್ನು ಕಾಯಿಲೆ ತರದಷ್ಟು ದುರ್ಬಲಗೊಳಿಸಿ ಚುಚ್ಚುತ್ತಾರೆ. ಆದರೂ ಚುಚ್ಚಿದ ರೋಗಾಣುಗಳನ್ನೇ ಮನು ಷ್ಯನ ದೇಹದಲ್ಲಿರುವ ರಕ್ತವು ಪ್ರತಿಭಟಿಸುತ್ತದೆ. ಈ ಪ್ರತಿಭಟನಾ ಶಕ್ತಿಯಿರು ವಾತನಿಗೆ ಮುಂದೆ ಅದೇ ಬೇನೆ ಬರುವುದಿಲ್ಲ. ಅಂಥದೇ ರೀತಿಯಿಂದ ಇಂದು ಸಿಡುಬು ರೋಗವನ್ನು ನಾಶಮಾಡಿದ್ದಾರೆ.

ಆದರೆ ಅಷ್ಟೊಂದು ಚಿಕಿತ್ಸಕ ಗುಣ ಮಂಗನ ಕಾಯಿಲೆಯನ್ನು ಪ್ರತಿ ಭಟಿಸುವ ಲಸಿಕೆಗೆ ಬಂದಿಲ್ಲ. ಈ ಬೇನೆ ಹಬ್ಬಿದ ಪ್ರದೇಶದವರು, ಆ ಲಸಿಕೆ ಯನ್ನು ಎರಡು ಮೂರು ಬಾರಿ ಚುಚ್ಚಿಸಿಕೊಂಡರೆ, ರೋಗ ಅಂಟಿದ 100

ಮಂದಿಯಲ್ಲಿ 70 ಜನರಿಗೆ ರಕ್ಷಣೆ ಸಿಕ್ಕೀತು. ಅದಕ್ಕಿಂತ ಹೆಚ್ಚಿಗೆ ಪ್ರಯೋಜನ ಕಾರಿಯಾದ ಲಸಿಕೆ ಇನ್ನೂ ತಯಾರಾಗಿಲ್ಲ.

ಆಗ ಈ ಬೇನೆಯಿಂದ ತಪ್ಪಿಸಿಕೊಳ್ಳುವ ಉಪಾಯವೆಂದರೆ ಉಣುಗುಗಳು ಬಿದ್ದಿರಬಹುದಾದ ಅರಣ್ಯ ಭಾಗಗಳಲ್ಲಿ, ಅಲೆದಾಡದಿರುವುದೂ ಒಂದು ಉಪಾಯ. ಅಂಥಲ್ಲಿ ಅಲೆಯುವಾಗ ಉಣ್ಣಿ ನಮ್ಮ ಮೈಯನ್ನು ಸೇರದಂತೆ ಯೋಗ್ಯ ಔಷಧಿಗಳನ್ನು ಸವರಿಕೊಂಡು, ಹೋಗಬೇಕು. ಇಲ್ಲದಿದ್ದರೆ, ಇಂಥ ಉಣ್ಣಿಗಳಿರುವ ಕಾಡಿನ ಗಿಡಗಳ ಮೇಲೂ, ನೆಲದ ಮೇಲೂ ಕ್ರಿಮಿನಾಶಕಗಳನ್ನು ಚಿಮುಕಿಸಿ ಅವುಗಳನ್ನು ನಾಶಪಡಿಸಬೇಕು. ಮತ್ತು ನಮ್ಮ ಜಾನುವಾರುಗಳ ಮೈಯಿಂದ ಉಣ್ಣಿಗಳನ್ನು ಸಂಪೂರ್ಣವಾಗಿ ನಾಶಪಡಿಸಬೇಕು.

---

## ಹ್ಯಾಮಾ ಫೈಸಾಲಿಸ್ ಸ್ಪೈನಿಜೆರಾ ಉಣ್ಣಿಯ ಜೀವನ ವೃತ್ತ

ಜೂನ್‌ನೊಂದಿಗೆ ಮಳೆಗಾಲ ತೊಡಗಿದೊಡನೆ ಕಾಡಿನ ತರಗೆಲೆಯಡಿಯಿಂದ ಎದ್ದು ಬರುವ ಗಂಡು ಹೆಣ್ಣು ಉಣ್ಣಿಗಳು ಜಾನುವಾರುಗಳ ಮೈ ಸೇರಿ ರಕ್ತ ಹೀರಿ ಅಲ್ಲೇ ಜೋಡಿಯಾಗುತ್ತವೆ. ಬಸಿರಾದ ಹೆಣ್ಣು ಮತ್ತಷ್ಟು ರಕ್ತ ಕುಡಿದು ಬೀಗಿಕೊಂಡು ನೆಲಕ್ಕುರುಳಿ ತರಗಿನಡಿ ಸೇರಿಕೊಂಡು 8–10 ದಿನಗಳಲ್ಲಿ 4–5 ಸಾವಿರ ಮೊಟ್ಟೆಗಳನ್ನಿಟ್ಟು ಸತ್ತು ಹೋಗುತ್ತದೆ. ಮಳೆ ಮುಗಿದು ಬಿಸಿಲು ಕಾಯುವಾಗ (ಸಪ್ಟಂಬರ) ಮೊಟ್ಟೆಯೊಡೆದು ಬರುವ ಮರಿಗಳು ತರಗೆಲೆಗಳಡಿಯಿಂದ ಹತ್ತಿರದ ಗಿಡಗಳನ್ನೇರಿ ಎಲೆಗಳಡಿಯಲ್ಲಿ ಕಾದಿದ್ದು ಚಿಕ್ಕ ಪುಟ್ಟ ಪ್ರಾಣಿಗಳಿಗಂಟಿ ರಕ್ತ ಹೀರುತ್ತವೆ. ರಕ್ತದೊಂದಿಗೆ ಕಾಯಿಲೆಯ ವಿಷಾಣುಗಳನ್ನೂ ಪಡೆಯುತ್ತವೆ. ಹೊಟ್ಟೆ ತುಂಬಿಸಿಕೊಂಡು ಬಿದ್ದು ಪುನಃ ತರಗೆಲೆಗಳಡಿ ಸೇರಿ ನಿದ್ರೆ ಮುಗಿಸಿ ಪರೆಕಳಚಿ ನಿಂಫ್‌ಗಳಾಗಿ ಹೊರಬರುತ್ತವೆ. ಹಿಂದಿನಂತೆಯೇ ಹತ್ತಿರದ ಗಿಡವೇರಿ ಕುಳಿತು ಹಾದುಹೋಗುವ ಪ್ರಾಣಿಪಕ್ಷಿಗಳಿಗಂಟಿಕೊಂಡು ರಕ್ತ ಹೀರುತ್ತವೆ. ಹೀಗೆ ರಕ್ತ ಹೀರುತ್ತಿರುವಾಗಲೇ ಮರಿಯಾಗಿದ್ದಾಗ ಪಡೆಕೊಂಡ ಕಾಯಿಲೆಯ ವಿಷಾಣುಗಳನ್ನು ಕಚ್ಚಿಕೊಂಡ ಪ್ರಾಣಿಗೆ

**ಮಂಗನ ಕಾಯಿಲೆಯ ಪರಿವಹನ ಚಕ್ರ.**




(ಮನುಷ್ಯರಿಗೂ) ದಾಟಿಸುತ್ತವೆ. ರಕ್ತ ಹೀರಲು ಪ್ರಾಣಿಗಳೇ ಸಿಗದ ನಿಂಫ್‌ಗಳು ಹಾಗೇ ದೀರ್ಘ ಕಾಲದವರೆಗೆ ಕಾಯುತ್ತಿರುತ್ತವೆ. ಮಳೆಗಾಲ ಬಂದೊಡನೆ ರಕ್ತ ಕುಡಿದ ಯಾ ಕುಡಿಯದ ಎಲ್ಲ ನಿಂಫ್‌ಗಳೂ ಮರಿಗಳೂ ತರಗಿನಡಿ ಭೂಗತವಾಗಿ ಸುಪ್ತವಾಗುತ್ತವೆ. ಹೀಗೆ ಸುಪ್ತವಾಗುವ ರಕ್ತ ಕುಡಿದ ನಿಂಫ್‌ಗಳು ಸ್ವಲ್ಪ ದಿನಗಳಲ್ಲೇ ಹೆಣ್ಣು ಯಾ ಗಂಡುಗಳಾಗಿ ಮಳೆಗಾಲದಲ್ಲೇ ಹೊರಬಂದು ಪುನಃ ಜಾನುವಾರುಗಳ ಮೈ ಸೇರುತ್ತವೆ. ರಕ್ತ ಹೀರದ ನಿಂಫ್‌ಗಳು ಮತ್ತು ಮರಿಗಳು ಮಳೆಗಾಲ ಮುಗಿಯುವ ವರೆಗೂ ಕಾದಿದ್ದು ಬಿಸಿಲು ಕಾದೊಡನೆ ಹೊರಬಂದು ಆಹಾರಕ್ಕಾಗಿ ಪ್ರಾಣಿಗಳ ಪ್ರತೀಕ್ಷೆ ಮಾಡುತ್ತವೆ.

1161

COMMUNITY HEALTH CELL
47/1, (First Floor) St. Marks Road,
Bangalore - 560 001.

37

# ಸದಾಶಯ ಪ್ರಕಾಶನ

## ಮುಂಡಾಜೆ ದ. ಕ. 574 228

ಡಾ। ಹ. ರ. ಭಟ್ಟ ಅವರ 'ಕ್ಯಾಸನೂರ ಕಾಡಿನ ಕಾಯಿಲೆ (ಮಂಗನ ಕಾಯಿಲೆ) ಕುರಿತಾಗಿ 'ತರಂಗ' ವಾರಪತ್ರಿಕೆ ಹೇಳಿದ್ದು

"...ಪುಣೆಯಲ್ಲಿರುವ ರಾಷ್ಟ್ರೀಯ ವಿಷಾಣು ವಿಜ್ಞಾನ ಸಂಸ್ಥೆಯ ಉ ನಿರ್ದೇಶಕ ಡಾ। ಹ. ರ. ಭಟ್ಟರು ಬರೆದಿರುವ ಈ ಪುಸ್ತಕ 'ಮಂಗನ ಕಾಯಿಲ ಬಗ್ಗೆ ಸೃಷ್ಟಿಯಾಗಿರುವ ಗೊಂದಲಮಯ ವಾತಾವರಣವನ್ನು ತಿಳಿಗೊಳಿಸಲ ಸಹಕಾರಿಯಾಗಿದೆ.

ಮಂಗನ ಕಾಯಿಲೆ ರೋಗ ಹರಡಲು ಕಾರಣಗಳೇನು? ಕಾಡುಗಳ ನಾ ದಿಂದ ಇದು ಹೇಗೆ ಸೃಷ್ಟಿಯಾಯಿತು? 1957ರಿಂದ ಈ ಕಾಯಿಲೆ ಕುರಿತ ನಡೆದಿರುವ ಅಧ್ಯಯನ, ಪ್ರಯೋಗ, ಪರಿಣಾಮಗಳನ್ನು ಸರಿಯಾಗಿ ವಿಶ್ಲೇ ಸಿದ್ದಾರೆ. ಮಂಗನ ಕಾಯಿಲೆಯ ಬಾಹ್ಯ ಲಕ್ಷಣ, ರೋಗಿಗಳ ಆರೈಕೆ, ರೋ ಪ್ರತಿಬಂಧ ಹಾಗೂ ನಿಯಂತ್ರಣ, ಮುಂಜಾಗ್ರತಾ ಕ್ರಮ, ರೋಗಕ್ಕೆ ಕಾರ ವಾಗುವ ಉಣ್ಣಿಗಳ ಜೀವನ ವೃತ್ತವನ್ನು ಸಚಿತ್ರವಾಗಿ ವಿವರಿಸಿದ್ದಾರೆ.

ವೈದ್ಯಕೀಯ ವಿಷಯವನ್ನು ಶ್ರೀ ಸಾಮಾನ್ಯನಿಗೂ ಅರ್ಥವಾಗುವಂ ಕನ್ನಡದಲ್ಲಿ ಹೇಳಬಹುದೆಂಬುದನ್ನು ಡಾ। ಹ. ರ. ಭಟ್ಟ ಹಾಗೂ ಸಂಪಾದಿಸಿ ಶಂಪಾ ದೈತೋಟರು ಸರಳ ಶೈಲಿಯಲ್ಲಿ ಸಾಧಿಸಿ ತೋರಿಸಿದ್ದಾರೆ..."

(ತರಂಗ 11 ಮಾರ್ಚ್ 1984

**ಮುಂದಿನ ಪ್ರಕಟಣೆ:**

ಡಾ। ಹ. ರ. ಭಟ್ಟರ ಮಂಗನ ಕಾಯಿಲೆ ಉಣ್ಣಿಗಳು ಮತ್ತು ಹತೋಟಿ

**ಬರಲಿವೆ**

1) ಬೀಡಿ ಮುಂದಿನ ಪೀಳಿಗೆಗೂ ಬೇಡಿ —ಡಾ। ಹ. ರ. ಭಟ್ಟ
2) ಹೆಂಡದ ಹಾವಳಿ (ತಜ್ಞರಿಂದ)

---

ಓದಿ, ಓದಿ ಹೇಳಿ–ಸಮಾಜಕ್ಕೆ ನೆರವಾಗಿ

# ನೆರವು ಬೇಕು

ಮಂಗನ ಕಾಯಿಲೆ ಯಾ ಕ್ಯಾಸನೂರ ಕಾಡಿನ ಕಾಯಿಲೆಗೆ ಬಲಿಯಾಗುವವರು
ಕಾಡಿನಾಧಾರದಲ್ಲಿ ದುಡಿಯುವ ಬಡವರು.
ಅವರಿಗೆ ನಿಮ್ಮ ಸಹಾನುಭೂತಿ ಸಹಾಯಗಳು ಬೇಕು.

ಬೆಳ್ತಂಗಡಿಯಲ್ಲಿ ಸ್ಥಾಪಿತವಾಗಿರುವ

**'ಮಂಗನ ಕಾಯಿಲೆ ಪರಿಹಾರ ಸಮಿತಿ'**

ಸಂತ್ರಸ್ತರಿಗೆ ಸರ್ವ ನೆರವನ್ನು ನೀಡುವುದಲ್ಲದೆ ರೋಗ ಪ್ರತಿಬಂಧಕ
ಕಾರ್ಯಾಚರಣೆ ನಡೆಸುತ್ತಿದೆ.

ದಯವಿಟ್ಟು ನೆರವಿತ್ತು ಸಮಿತಿಯನ್ನು ಬಲಪಡಿಸಿ.

ದೇಣಿಗೆಗಳನ್ನು ಚೆಕ್/ಡ್ರಾಫ್ಟ್ ಮೂಲಕ (K. F. D. Relief
committee Belthangady) ಕಳಿಸಬಹುದು ಯಾ
ಸ್ಟೇಟ್ ಬ್ಯಾಂಕ್, ಬೆಳ್ತಂಗಡಿ ಶಾಖೆಯ ಎಕೌಂಟ್ ನಂ. 675ಕ್ಕೆ
ವರ್ಗಾಯಿಸಬಹುದು.

ಸನ್ಮಾನ್ಯ ಧರ್ಮಸ್ಥಳ ಶ್ರೀ ವೀರೇಂದ್ರ ಹೆಗ್ಗಡೆಯವರು ಗೌರವಾಧ್ಯಕ್ಷರೂ,
ಶಾಸಕ ಶ್ರೀ ವಸಂತ ಬಂಗೇರರು ಅಧ್ಯಕ್ಷರಾಗಿ ಮತ್ತು ತಹಶಿಲ್ದಾರ್
ಶ್ರೀ ನೆ. ರಾ. ಸುಬ್ಬರಾವ್ ಕಾರ್ಯದರ್ಶಿಯಾಗಿರುವ
ಈ ಸಮಿತಿಯ ವಿಳಾಸ: ಬೆಳ್ತಂಗಡಿ 574 214.

---

ಲಯನ್ಸ್ ಕ್ಲಬ್ ಮುಂಡಾಜೆ (ದ. ಕ.) 574 228



'ಕಾಡು ಕೊರಗರು, ಎನ್ನಿಸಿಕೊಂಡಿರುವ ಈ ಗಿರಿಜನರಿಗೆ ಕಾಡೇ ಕಲ್ಪವೃಕ್ಷ. ಕಾಮಧೇನು. ಕಾಡನ್ನು ಬಿಟ್ಟು ನಡೆಯದು ಇವರ ಪಾಡು. ಮಂಗನ ಕಾಯಿಲೆಗೆ ಇಂಥವರೇ ಹೆಚ್ಚು ಬಲಿ.